ಒಂದಾಣೆ ಮಾಲೆ 20

# ಕರಿ ನಾಯಿ

(ವಿನೋದ ಕಥೆ)

[ದ್ವಿತೀಯ ಮುದ್ರಣ]



ಕತೆಗಾರರು:
ದಿ| ಎಮ್. ಎನ್. ಕಾಮತ್,
ಮಂಗಳೂರು.



1961

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

(ಹೊದಿಕೆಯ ೩ನೇ ಪುಟದಿಂದ ಮುಂದುವರಿದುದು)

ಅವಳ ಮಾತು ಕೇಳಿ, ಸುಬ್ಬು ಸುರಿದ ನಿಟ್ಟುಸಿರಿನ ವೇಗದಿಂದ, ಕೋಣೆಯಲ್ಲಿ ಬಹು ದಿನಗಳಿಂದ ಅಲ್ಲಲ್ಲಿ ಉಳಿದಿದ್ದ ಧೂಳೆಲ್ಲವೂ ಎದ್ದು, ಕೋಣೆಯೊಳಗಿಂದ ಪ್ಲಾಂಟರಳ ಮೋಟರು ಓಡಾಡಿದಂತೆ ಭಾಸವಾಗುತಿತ್ತು; ಇರಲಿ. ಅಲ್ಲಿಗೆ ಈ ಸಂದರ್ಶನ ಮುಗಿಯಿತು. ಸುಬ್ಬು ಪ್ಲಾಂಟರಳನ್ನೂ, ನಾನು ಚಂದ್ರಾವತಿಯನ್ನೂ, ಕೆಳಬಾಗಿಲ ತನಕ ನಡೆಯಿಸಿ, ಮೋಟರು ಹತ್ತಿಸಿ, ಮರ್ಯಾದೆಯಿಂದ 'ಶ್ರದ್ಧಾಪೂರ್ವಕವಾಗಿ' ಕಳುಹಿಸಿ ಕೊಟ್ಟೆವು.

ಪುನಃ ಕೋಣೆಯೊಳಗೆ ಕಾಲಿಟ್ಟ ಕೂಡಲೇ ಸುಬ್ಬು, 'ನಿನ್ನ ತಲೆ ರುಸ್ತುಂ ತಲೆ' ಎಂದನು. ಈ 'ರುಸ್ತುಂ' ಏನರ್ಥವೋ ಅವನೇ ಬಲ್ಲ. 'ಇನ್ನು ಆ ಕುದುರೆಮುಖದ ಜೀವನಚರಿತ್ರೆ ಬರೆ' ಎಂದನು.

ಅಂತು ಒಂದು ವಾರ ಕಳೆಯಿತು. ಸುಬ್ಬು, ಕಾಗದ ಮುಟ್ಟಿದುದಿಲ್ಲ. ನಾನು 'ಕೆನ್ವಾಸ್'' ಬಟ್ಟೆ ಹಿಡಿದುಕೊಂಡು, ನಾಲ್ಕು ಸಲ ಅವಳ ಬಂಗಲೆಗೆ ತೆರಳಿ, ಚಂದ್ರಾವತಿಯ ಪರಾಮರ್ಶೆಯೊಡನೆ, ನನ್ನ 'ತೈಲಚಿತ್ರ'ವನ್ನು ಆರಂಭಿಸುವ ಹಂಚಿಕೆಯಿಂದ ಅದರ ಮೇಲೆ ರೇಖೆಗಳನ್ನು ಎಳೆದೇ 'ಡ್ರೋಯಿಂಗ್'' ಪಾಠ ಕಲಿತೆನು.

ಎರಡನೇ ವಾರ, ಅಲ್ಲಿಗೆ ಹೋಗುವಾಗ, ಪ್ಲಾಂಟರಳಿಲ್ಲ 'ತೋಟದಲ್ಲಿ ಆಳುಗಳ ಮುಷ್ಕರ; ಬೇಂಕು ರಜೆ ತೆಗೆದುಕೊಂಡಿದೆ; ತಗಾದೆ ಹೆಚ್ಚಾಗಿದೆ' ಎಂದು ತಂತೀ ವಾರ್ತೆ ಬಂದಕಾರಣ, ಅವಳು ಊರಿಗೆ ಹೊರಟಳಂತೆ. ನಾನು ಅಲ್ಲಿಗೆ ಹೋಗುವಾಗ ಚಂದ್ರಾವತಿ ಗಂಟುಮೂಟೆ ಕಟ್ಟುತಿದ್ದಳು. ನನಗೊಂದು ಪತ್ರ ಕೊಟ್ಟಳು. ಅದರಲ್ಲಿ 'ಜೀವನ ಚರಿತ್ರೆ' ಮತ್ತು 'ತೈಲಚಿತ್ರ' ಪ್ರಕಟವಾದಾಗ, ಒಂದು ಪ್ರತಿ ಕ್ರಯಕ್ಕೆ ಕಳುಹಬಹುದೆಂಬ ಮಹಾಶಯೆಯ ಸೂಚನೆ.

ಕರೀನಾಯಿಯ ಪತ್ತೆಯಿಂದ ಸುಬ್ಬು ನೆಂಟನಾಗಿ, ನಮ್ಮಲ್ಲಿರುವಂತಾಯಿತು. ರಾತ್ರಿ ಭೋಜನದ ನಂತರ, ನಾವು ಇಬ್ಬರೂ, ವಿನೋದಾರ್ಥವಾಗಿ, 'ಜಿಪ್‌ಕೀ ಜೈ' ಎನ್ನುವುದುಂಟು. ಇದು ನಿಮಗೂ ಕೇಳಿಸಲೆಂದು ಇಷ್ಟು ಬರೆದೆ. ನಮ್ಮ 'ಲೇಖನ ವ್ಯವಸಾಯ'ವೂ 'ಭಾಷಾಸೇವೆ'ಯೂ ಇಷ್ಟಕ್ಕೆ ಬಂದಿದೆ! ಇನ್ನು ಚಂದ್ರಾವತಿ ಗಂಡುಮಗುವನ್ನು ಹೆತ್ತರೆ, ಆ ಮಗುವಿನ ತೊದಲ್ನುಡಿ ತಿದ್ದುವುದಷ್ಟೆ 'ಡೈರೆಕ್ಟ್ ಮೇಥಡ್'ನ ಭಾಷಾಸೇವೆ ನನಗೆ ಯಥೇಷ್ಟ. ಇದಕ್ಕಾಗಿಯೇ ಹೇಳಿದ್ದೆನು, —'ಸುಖ'ವು 'ಸುಃಖ'ವಾಗದು, — ಸುಖವೇ—ಎಂದು.

# ಕರೀನಾಯಿ

'ದುಃಖಕ್ಕೂ ಸುಖಕ್ಕೂ ಭೇದವೆಷ್ಟು? 'ದುಃಖ'ವು 'ದುಖಃ'ವಾಗದು. 'ದುಖ'ವೂ ಆಗದು. ಸುಖವು 'ಸುಃಖ'ವಾಗದು! ದುಃಖ, ದುಃಖವೇ, —ಸುಖ, ಸುಖವೇ!'

ಇದು ನನ್ನ ಮಾತು, ಸುಬ್ಬಣ್ಣಯ್ಯನೊಡನೆ. ಸುಬ್ಬಣ್ಣಯ್ಯನೂ ನಾನೂ ಒಂದೇ ಕೋಣೆಯಲ್ಲಿ ಲೇಖನವ್ಯವಸಾಯ ಮಾಡಿರುತಿದ್ದೆವು. ಕನ್ನಡ ಲೇಖಕರಿಗೆ ದೊರೆವ ಬಹುಮಾನವೆಷ್ಟೆಂದು ಸರ್ವರೂ ತಿಳಿದಿರುವಾಗ, ದ್ರವ್ಯರೂಪವಾಗಿ ದೊರೆಯುತಿದ್ದುದು ಎಷ್ಟೆಂದು ಬೇರೆ ಬರೆವುದೇಕೆ? ತಿಂಗಳಿಗೆ ಮೂವತ್ತು ದಿನವೂ ಬರೆವುದು ನಮ್ಮ ಉದ್ಯೋಗ; ಹತ್ತೋ ಹನ್ನೆರಡೋ ರೂಪ್ಯಾ ದೊರೆವುದು ವಿಧಿಯ ಅನುಗ್ರಹ! ಸುಬ್ಬಣ್ಣಯ್ಯನು ನನಗಿಂತಲೂ ಗಟ್ಟಿಗ; ನಾನು ನಿಶ್ಚಿಂತ ವ್ಯಕ್ತಿ—ಅಷ್ಟೆ. ಅವನಲ್ಲಿ ಚಿಂತೆ ಯೋಚನೆ ಇದ್ದಷ್ಟೆ ನನ್ನಲ್ಲಿ ಭರವಸೆ ಅನಿಚ್ಛೆ; ಹೀಗಾಗಿ ಹೇಗೂ ನಮ್ಮಿಬ್ಬರ ಗೆಳೆತನವಾಗಿದ್ದಿತು. ಅಂದಿನ ತಿಂಗಳ ಲೆಕ್ಕವೇನೂ ನಮ್ಮಿಂದ ಸಂದಿರಲಿಲ್ಲ. ತಿಂಗಳ ಕೊನೆಗೆ ಇನ್ನೂ ನಾಲ್ಕು ದಿನವಿರುವಾಗಲೇ, ನಮಗೆ ಬರುತಿದ್ದ 'ಟಪ್ಪಾಲೆ'ಲ್ಲ—'ಬೀಲು'ಗಳೇ ಆಗಿದ್ದುವು. ಬೇಂಕಿನಿಂದ ಒಬ್ಬಿಬ್ಬರು ಠೇವಣಾತಿಯನ್ನು ಹಿಂದಕ್ಕೆಳೆದ ಕೂಡಲೇ, ಎಲ್ಲರೂ ಬೆದರಿ ಬೇಂಕನ್ನು ಬಂದು ಮಾಡಲೆತ್ನಿಸಿದರೆ, ಸಾಮ್ರಾಜ್ಯ ಸರಕಾರಕ್ಕೇ ಪೂರೈಸದೆ, ಸಂಕಟವುಂಟಾಗುವಂತೆ, ಒಬ್ಬಿಬ್ಬರು ನಮಗೆ ತಗಾದೆ ಹಚ್ಚುತ್ತಲೇ ಗೋಳಿಕಟ್ಟೆ-ಹಂಪನಕಟ್ಟೆ ಬಜಾರುಗಳೇ ನಮ್ಮ ಮೇಲೆ ದಾಳಿಯಿಡಲು ತವಕಗೊಂಡಿದ್ದುವು, ಎಂದೇ ಸುಬ್ಬಣ್ಣಯ್ಯನ ಚಿಂತೆ. ಅದೇ ನಾನೆಂದುದು, ಶುದ್ಧ ಸಮಾಧಾನದ ವಚನ—'ದುಃಖ,ದುಃಖವೇ; ಸುಖ ಸುಖವೇ' ಹೊರತು—'ದುಃಖ'ವು 'ದುಖಃ'ವಾಗದು 'ದುಖ'ವೂ ಆಗದು,'ಸುಖ'ವು,'ಸುಃಖ'ವೂ ಆಗದು ಎಂದು. ಬೇರೆ ಯಾವ ಗೀತಾಶ್ಲೋಕಗಳನ್ನಾದರೂ ಹೇಳಿ ಸಮಾಧಾನ ಮಾಡುತಿದ್ದೆ, ಆದರೆ—ಬಾಯಿಪಾಠವಿಲ್ಲ.

ಟಪ್ಪಾಲು ಬಂತು. ಮೊದಲನೆಯ ಲಕ್ಕೋಟೆಯಲ್ಲೇ—'ಇನ್ನು ಬಾಕಿಯಿಡಲು ಸಾಧ್ಯವಿಲ್ಲ'ವೆಂದು ದರ್ಜಿಯ ದೂರು. 'ಎಂಟನೇ ದಿನದ

ವಾಯಿಂದೆ ತಪ್ಪಿದರೆ ವಕೀಲನೊಡನೆ'ಂದು ಹಾಲುಮಾರುವವಳ ತಗಾದೆ; 'ಹೊರಕ್ಕೆ ಹೋಗುವ ಮೊದಲೇ ತಿಳಿಸಿಬಿಡಿರಿ!' ಎಂದು ಮನೆಯ ಯಜಮಾನನ ನೋಟಿಸು. 'ಫೌಂಟನ್‌ಪೇನಿ'ನ ಕ್ರಯ ಬಂದಿಲ್ಲವಾಗಿಯೂ, ಮಸಿಯ ಎಂಟಾಣೆ ಇನ್ನೂ ಬಾಕಿಯಿಟ್ಟು ಲೇಖನಗಳನ್ನು ಬರೆದರೆ ಅವುಗಳು ಸಂಪಾದಕರಿಂದ ಪ್ರಕಟಹೊಂದದೆ ಹಿಂದಿರುಗಿ ಬರುವ ಅವಲಕ್ಷಣ ಹುಟ್ಟಿಸುವುದಾಗಿಯೂ, 'ಗೊಂಬೇಸ್ಟೋರಿ'ನ ಸೂಚನೆ. 'ಇರಲಿ, ಸುಬ್ಬಣ್ಣಾ,—ಮೂರುವರೆ ವಾರು ವಸ್ತ್ರದಿಂದ ಒಂದೇ ತುಂಡಾಗಿ ಹೊಲಿದುಕೊಟ್ಟ ದರ್ಜಿಯೂ ಮಜೂರಿಗೆ ಬಾಕಿಯಿಡಲು ಸಾಧ್ಯವಿಲ್ಲವೆನ್ನುತ್ತಾನೆ. ಇಂತಹ ಕೃತಘ್ನರಿರಬಹುದೇ? ಒಂದೇ ದನದ ನಾಲ್ಕು ಕುಡುತೆ ಹಾಲನ್ನು, ಕುಡ್ತೆಗೆ ೬, ೮, ೯ ಪೈಗಳಂತೆ ಬೆಲೆಹಾಕಿ, ಹದಿನೆಂಟು ಜನರಿಗೂ ಮಾರುತಿದ್ದ ಸೇಸು ಹೆಂಗಸಿಗೂ ನೋಟಿಸು ಬರೆದುಕೊಡುವ ವಕೀಲರಿರುವರೇ? ಮನೆಬಿಟ್ಟೆವೆಂದರೆ ದಿವಾಳಿಯೆಂದರ್ಥ ಮಾಡುವ ದನಿಗಳಿರಬಹುದೇ? ಲೋಕವೇ ಹೀಗೆ. ಕಾಗೆಯಂತೆ ಕಪ್ಪೆಂದು ಕೊಟ್ಟ ಮಸಿಯು ನೀರಂತೆ ಹರಿದು, ಬಕದಂತೆ ಬೆಳ್ಳಗಾಗಿ ಮಾಯವಾಗುವಾಗ, ಸಂಪಾದಕರು ನಾವು ಬರೆದುದನ್ನು ಓದಿದರೆ ಯಥೇಷ್ಟವೆಂದು ನಂಬಿರುವಾಗ, ಇವನ ಎಂಟಾಣೆಗಾಗಿ ನಮ್ಮ ಗಂಟು ಬರಿದಾಗುವುದೇ? ಏನು ಮಾಡಲಿ, ಕಡಕ್ಕೆ ಕಾಲಿಟ್ಟು—ಕಡವು ದಾಟಲು ಕಾಸಿಲ್ಲವಾಯಿತು' ಎಂದು ನಾನೆಂದೆನು.

ಸುಬ್ಬಣ್ಣನು ಅವನ ಪತ್ರಿಕೆಯನ್ನು ಅಗಲಕ್ಕೆ ಬಿಡಿಸಿ, ಮೇಜಿನ ಮೇಲಿಟ್ಟು, ನಿನ್ನೆಯ ಅನಂತವ್ರತದ ಪ್ರಸಾದ ತಂದುದನ್ನು ಅದರ ಮೇಲೆ ಹರಡಿಸಿ,—'ಹೇಗೂ ಕಡವಾಗಿದೆ, ಈ ಪ್ರಸಾದ ತಂದ ಭವಾನಿಗೂ ಕಾಣಿಕೆ ಕೊಟ್ಟಿಲ್ಲ; ಆದರೆ ಬೆಳಗ್ಗಿನ ಮುಹೂರ್ತವನ್ನು ಪ್ರಸಾದ ತಿಂದೇ ಮುಗಿಸೋಣ' ಎಂದನು. ಪ್ರಸಾದವೆಂದರೆ—ಇಷ್ಟು ಕಜ್ಜಾಯ, ಒಂದು ಲಾಡು, ಒಂದು ಮಂಡಿಗೆ. 'ಇಬ್ಬರೂ ತಿನ್ನುವುದೆಂದರೆ—ಒಬ್ಬೊಬ್ಬರಿಗೂ ಕಾಲು ಹೊಟ್ಟೆಯಾಗುವುದು; ಅದಕ್ಕಾಗಿಯೇ ಕಾಲುರೂಪಾಯಿ ಕಾಣಿಕೆ ಕೊಡಬೇಕಾಗಿದೆ' ಎಂದನು. ಮೊದಲಾಗಿ ಕಜ್ಜಾಯದ ಕಡೆಗೆ ನಮ್ಮ ಕೈಗಳೋಡಿದವು, ಅಷ್ಟು ಸ್ಥಳ ಬರಿದಾದುದೇ, ಅದರ ಅಡಿಯಲ್ಲಿ ಅಚ್ಚಾದುದನ್ನು ಸುಬ್ಬಣ್ಣಯ್ಯನು ಓದಿ ನಕ್ಕನು; ನಗುವಾಗ ಬಾಯಿಯಲ್ಲಿದ್ದಷ್ಟು ಇಡೀ

ಪತ್ರಿಕೆಯ ಮೇಲೆ ಚೆಲ್ಲಿದ್ದಿತು. ಮುಂದೆ, ಪ್ರಸಾದವನ್ನು ನಾವಿಬ್ಬರೂ ತಿನ್ನಲಿಲ್ಲ. ಪತ್ರಿಕೆಯನ್ನು ಸುಬ್ಬಣ್ಣ ನೆತ್ತಿಕೊಂಡನು.

'ಕಾಣೆಯಾಗಿದೆ—ಕರೀನಾಯಿ. ಬಲು ಚಿಕ್ಕದು, ಜಿಪ್ ಎಂದರೆ ಬರುತ್ತದೆ. ಬಾಲ ಗಿಡ್ಡ, ರೋಮ ಉದ್ದ, ಮುಸುಡು ಅಗಲ, ತಂದು ಕೊಟ್ಟರೆ ರೂಪಾಯಿ ನೂರರ ಬಹುಮಾನ! ನಿನ್ನೆ ಕಂಕನಾಡಿ ಗೇಟಿನಿಂದ ಉರ್ವದ ಗೇಟಿನೊಳಗಣ ದಾರಿಯಲ್ಲಿ ಬರುತ್ತಾ ಎಲ್ಲಿಯೋ ದಾರಿತಪ್ಪಿ ಮಾಯವಾಗಿದೆ. ತರುವವರು ಕೆಳಗಣ ವಿಳಾಸಕ್ಕೆ ಬರಲಿ—ಶ್ರೀಮತಿ ತಿರುಮಲಮ್ಮ, ಕಾಫಿ ಪ್ಲಾಂಟರ್, ಮೊಕ್ಕಾಂ, ಪಳ್ಳಿಕೆರೆ' ಎಂದಿಷ್ಟೆ ಅದರಲ್ಲಿನ ವಿಜ್ಞಾಪನೆ.

'ಅದೃಷ್ಟ' ಎಂದನು ಸುಬ್ಬಣ್ಣ. 'ಸುಬ್ಬಣ್ಣ, ನಿನ್ನ ಭಾಗ್ಯ'ವೆಂದೆನು ನಾನು. 'ನಿನಗೇನು ನೂರು ರೂಪಾಯಿ ಅಲ್ಪವೇ' ಎಂದನವನು. 'ಅಯ್ಯು, ನಮ್ಮ ಭಾಗ್ಯ' ಎಂದು ನಾನೊಪ್ಪಿಕೊಂಡೆನು.

ಇನ್ನು ಆ ವಿವರದ ಆ ಚರಸೊತ್ತನ್ನು ಹುಡುಕುವುದಿಷ್ಟೇ ಉಳಿಯಿತು. 'ನೂರು ರೂಪಾಯಿಯಾದರೆ, ಆ ದರ್ಜಿಯ ಅಂಗಡಿಯನ್ನೆ ಕೊಂಡುಕೊಳ್ಳಬಹುದು; ಸೇಸುವಿನ ದನದಂಥವು ನಾಲ್ಕು ಸಿಗಬಹುದು; ಮಸಿಯ ಸಾಗರವನ್ನೇ ರಚಿಸಿ, ಲೇಖಗಳನ್ನು ಬರೆದು, ಮರಳಿ ತವರ್ಮನೆಗೆ ಬಂದಿರುವ ನಮ್ಮ ಲೇಖನಗಳನ್ನು ಗೌರವಸ್ಥಾನದಲ್ಲಿ ಮುದ್ರಿಸಲು, ಎಂಥ ಸಂಪಾದಕರಿಗಾದರೂ ದುಡ್ಡು ಕೊಡಲೂ ಬರುವುದು! ಕರೀನಾಯಿ ಇಷ್ಟು ಅಪರಂಜಿ ಲಕ್ಷಣದೆಂದು ಯಾವ ಪಂಚಾಂಗದಲ್ಲೂ ನಾನು ಓದಿರಲಿಲ್ಲ' ಎಂದು ಸುಬ್ಬು ನಕ್ಕನು. ಕಳೆದ ಗ್ರಹಣಕಾಲದಿಂದೀಚೆ ನಮ್ಮ ಸುಬ್ಬುವಿನ ಚಂದ್ರವದನವು ತೇಜೋಭರಿತವಾದುದು ಇದೀಗಲೇ ಮೊದಲನೆಯ ಸಲ.

ಮಾತಾಡುವುದು ಸುಬ್ಬುವಿನ ಜನ್ಮರಾಶಿಯ ಫಲ. ಗೆಳೆಯನೆಂದ ಬಳಿಕ ಕರೀನಾಯನ್ನು ಹುಡುಕುವಷ್ಟು ಸಹಕಾರವು ನನ್ನದೆಂದೇ ನಾನು ಮಾತಾಡಿಲ್ಲವಾದರೂ, ನನ್ನ ಮನಸ್ಸಿನಲ್ಲೂ ನೂರು ರೂಪಾಯಿಗಳಿಂದ ಸಾಧ್ಯವಾಗಬಹುದಾದುದು ಇಷ್ಟೇ ಇತ್ತೆಂದು ತಿಳಿದಿದ್ದೆನು.

ಸರಿ. ಅನಂತವ್ರತದ ಪ್ರಸಾದ; ಕಾಣೆಯಾದ ನಾಯಿ; ನೂರು ರೂಪಾಯಿ; ಕಾಸಿಲ್ಲದ ತಗಾದೆ ಪ್ರಾಣಿಗಳು ನಾವಿಬ್ಬರು. ಇನ್ನೇನು? ಜನಿಗೆ ತಿಳಿಸದೆ, ಕೋಣೆ ಕದ ಮುಚ್ಚಿಡದೆ ಹೊರಬಿದ್ದೆವು.

ಭಾಗ್ಯವು ನೆರೆಯ ನೀರಿನಂತೆ ಬರತೊಡಗಿದರೆ, ಅದರ ಪ್ರವಾಹ ಬಲು ರಭಸದಿಂದಲೇ ಬರುವುದು. ಹೆಬ್ಬಾಗಿಲಿಗೆ ಈ ನೋಟೀಸು ಅಂಟಿಸಿರಬೇಕೆ? ಯಾವುದೊಂದು ಲೋಕಪೀಡಕವಾದ ಸಂಕಟನಿವಾರಣೆಗಾಗಿ ಹನ್ನೆರಡು ಅರ್ಜಿಗಳನ್ನು ಬರೆದುಕೊಂಡರೂ ನಿಧಾನವಾಗಿ ವಿಚಾರವಾಗುತ್ತದೆಂದೇ ಹೇಳುವ ನಮ್ಮ ಮುನಿಸಿಪಾಲಿಟಿಯು, ಅಂದು ನಮ್ಮ ಭಾಗ್ಯಕಾಲವು ಮೂಡುವುದಕ್ಕೂ ಮುಂಚಿತವಾಗಿಯೇ ನಮ್ಮ ಸಹಾಯಕ್ಕಾಗಿ ತನ್ನ ಪ್ರಚಂಡ ಬಲವನ್ನು ಉಪಯೋಗಿಸಿದ್ದು ನಮ್ಮ ಧನ್ಯವಾದಗಳಿಗೆ ಅರ್ಹವಾಗಿದ್ದಿತು. ಏನು ಎನ್ನಬೇಡಿರಿ; ಇಲ್ಲಿ ಕೇಳಿರಿ:—

ನಾಯಿಯಂಥ ಭಕ್ತನಿಲ್ಲ, ಉಪಕಾರಿಯಿಲ್ಲ. ಮುನಿಸಿಪಾಲಿಟಿಯೊಳಗೆ ಹೇಗೋ ಹುಟ್ಟಿ (ಜನನ ರಿಜಿಸ್ಟ್ರಿಯಲ್ಲಿ ಅಳತಾಸಿನೊಳಗೆ, ಜನನ 'ರಿಜಿಸ್ಟರು' ಮಾಡದೆಯೇ) ಹೇಗೋ ಬೆಳೆದು (ಮುನಿಸಿಪಾಲಿಟಿಗೆ ಕೊಳೆ ಕೂಡಿಸಿ ಒಯ್ಯುವ ಖರ್ಚನ್ನುಳಿಸಿ) ಹೇಗೋ ಜೀವಿಸಿರುವ ನಾಯಿಗಳು ಬಿಡೀನಾಯಿಗಳೆಂದು ಮುನಿಸಿಪಾಲಿಟಿಯ ಗೋಚರಕ್ಕೆ ಆಗಾಗ ಬರುವುದುಂಟು; ಇತರ ವೇಳೆಯಲ್ಲಿ 'ಬೀದಿನಾಯಿ'ಗಳಾದ ಇವು, ಆ ನೋಟಿಸು ಕಾಲಕ್ಕೆ 'ಬಿಡೀನಾಯಿ'ಗಳಾಗುವುವು. ಬೀದಿನಾಯಿಗಳಿಗೆ ಲೈಸನ್ಸಿಲ್ಲ, ದನಿಯಿಲ್ಲ; ಊರನ್ನು ಚೊಕ್ಕವಾಗಿಟ್ಟು, ಗುಮಾನಿಗಳನ್ನು ದಿಗಿಲುಗೊಳಿಸುವುದಿಷ್ಟೆ ಅವುಗಳ ಕೆಲಸ. ಅವುಗಳನ್ನು ಯಾರೂ ಸಾಕುವುದಿಲ್ಲ, ಸಾಕಿದರೆ ಅವು ಬದುಕುವುದೂ ಇಲ್ಲ. ಅಂಥ ಅಪೂರ್ವ ಅವಧೂತ ಲೋಕಹಿತೇಚ್ಛುಗಳು ಅವು! ಅವೇ ಬಿಡೀನಾಯಿಗಳಂತಾದ ಕೂಡಲೇ, ಅವು ಯಾರಿಗೂ ಬೇಡ. ಅವನ್ನು ಮನೆ ಹಿತ್ತಲುಗಳಿಂದ ಹೊರಕ್ಕೋಡಿಸುವರು, ಇಲ್ಲವೆ ಕೂಡಲೆ ರೂ. ೧-೮-೦ ತೆರಬೇಕಾಗುವುದು. ಅವುಗಳ ಉಪಕಾರವು, ಎರಡು ರೂಪಾಯಿ ತೆರಿಗೆ ಕೊಟ್ಟು ದೊರೆವ ಇತರ ಸೌಕರ್ಯಗಳಿಗಿಂತ ಅಧಿಕವಿರಬಹುದು; ಆದರೂ ಬಿಡೀನಾಯಿಯನ್ನು ಸಾಕುವ ಪಾಪ—ದೋಷಗಳೆರಡಕ್ಕೂ ಕರ್ತವ್ಯನಿಷ್ಠ ಪ್ರಜೆಗಳಾದ ನಾಗರಿಕರು ಎಂದೂ ಬಾಧ್ಯರಾಗಲು ಒಪ್ಪುವುದಿಲ್ಲ. ಕೇವಲ ಉಪಕಾರಕ್ಕೇ ಒದಗಿ, ಹೀಗೆ ಅಪಕಾರವನ್ನೇ ಪಡೆಯುವುದಕ್ಕೆ ಮಾತ್ರ— 'ಪ್ರಾತಿನಿಧ್ಯವಿಲ್ಲದೆ ತೆರಿಗೆಯಿಲ್ಲ' ಎಂಬೀ ಸೂತ್ರದ ಹಾಗೆ, ನಾಗರಿಕರ ಮೇಲೆ ರೇಗುವುದುಂಟು. ಈ ಬಗೆಯಲ್ಲಿ ರೇಗಿದರೆ, ನಮಗೆ ಅದು ಹುಚ್ಚೆಂದೇ ತೋರುವುದರಲ್ಲಿ ಆಶ್ಚರ್ಯವಿಲ್ಲ. ಆಗ ಅದು ಹುಚ್ಚುನಾಯಿ ಎಂದಾಯಿತು.

ಸೋಂಟಿಯನ್ನು ಪ್ರಯೋಗಿಸದೆ, ಬೀದಿನಾಯಿಯನ್ನು ಉರುಲು
ಬೀಸಿಹಿಡಿದು, ಬೀಳಿಸಿ, ಉಸಿರುಕಟ್ಟಿಸಿ ಕೂಡಲೇ ಉರುಲುಬಿಡಿಸಿ,
ಸಂಕೋಲೆ ಬಿಗಿದು, ಉರ್ವ ಮೈದಾನಿನ 'ಮಹಾರೋಗಿಗಳ ಭವನ'ದಲ್ಲಿ
ಪ್ರತಿದಿನ ಎಲ್ಲವನ್ನೂ ಸಾಯಂಕಾಲ ತಂದು ಒಂದೇ ಕಡೆ ಗೂಡಿಸಬೇಕೆಂದಾ
ಯಿತು. ನಾವು ಇಬ್ಬರೂ ನಾಲ್ಕು ಘಂಟೆಗೆ ಅಲ್ಲಿಗೆ ಹೋಗಿ ಕರೀನಾಯಿಯ
ಸಂದರ್ಶನವನ್ನು ಮಾಡಿ ಜಿಪ್‌ನನ್ನು ಕಾಣಲು ಧಾವಿಸುತ್ತಿದ್ದೆವು.
ಮೊದಲನೆಯ ದಿನ ನಿರಾಶೆಯಾಯಿತು. ಎರಡನೆ ದಿನ ದೊರೆತ ಎಲ್ಲ
ಕಪ್ಪು ನಾಯಿಗಳು ದೊಡ್ಡವೇ, ಮೂರನೆ ದಿನ ಉದ್ದವೆ. ನಂತರ, ಉದ್ದ
ಮುಸುಡಿನವು, ಮೊಂಡು ಬಾಲದವು, ಇತ್ಯಾದಿ. 'ನೂರು ರೂಪಾಯಿಯ
ಗಂಟೆಂದರೆ ಕನ್ನಡಿಯೊಳಗಣ ಗಂಟು' ಎಂದು ಸುಬ್ಬು ಎಂದನು. ಕರೀ
ನಾಯಿಗಳನ್ನು ಕೊಲ್ಲಬೇಕೆಂದು ಬೇಟೆಗಾರರಲ್ಲಿ ಉತ್ಸಾಹ ಹೋಗಲು,
ಆಸಕ್ತಿಪೋಷಕವಾದ ಈ ಜಾಹೀರಾತನ್ನು ತಿರುಮಲಮ್ಮನ ಹೆಸರಲ್ಲಿ
ಯಾರೋ ಬರೆದುದಲ್ಲವಷ್ಟೆ, ಎಂದು ನನ್ನಲ್ಲೂ ಸಂದೇಹ. ಅಥವಾ ಭಾಗ್ಯ
ಶಾಲಿಯಾದ ಮತ್ತೊಬ್ಬನು ಯಾರೋ ಜಿಪ್‌ನನ್ನು ಯಜಮಾನನಿಗೆ ಒಪ್ಪಿಸಿ
ಅತ್ತ ನೋಟನ್ನೂ ಪಡೆದನೇನೋ ಎಂದು ಶನಿವಾರ ರಾತ್ರಿ ಎಣಿಸಿ ನಾವಿಬ್ಬರೂ
ನಿದ್ದೆಹೋಗದೆ, ಏನೇನೋ ವಂಚಕ-ಪ್ರೇರಕ ಕನಸುಗಳನ್ನು ಕಂಡೆವು.

ಬೆಳಗಾಗುತ್ತಲೇ, ಅದೇ ಪತ್ರಿಕೆ! ಕೂಡಲೇ ನಾಲ್ಕನೇ ಪುಟದ ಒಂದ
ದಲ್ಲಿ,—ಅದೇ ಜಾಹಿರಾತು ಇದ್ದುದರಿಂದ ಜಿಪ್ ದೊರೆಯದಿದ್ದರೂ,
ನಮಗೆ ದೊರೆತಷ್ಟೆ ಆನಂದವಾಯಿತು. ನಮ್ಮ ಜೇಬಿನ ನೋಟನ್ನು
ಮತ್ತೊಬ್ಬ ಅಥವನು ಸೆಳೆಯಲಿಲ್ಲವೆಂದು ಸಂತೋಷವಾಯಿತು. ಫಲಾ
ಹಾರಕ್ಕೇನೂ ಉಪಾಯವಿಲ್ಲದಿದ್ದರೂ, ಕಾಫೀವಿಲಾಸದ 'ಹೌಸ್ ಒಫ್
ಲೋರ್ಡ್ಸ್ ಡಿನ್ನರ್' ಭೋಜನವಾದಷ್ಟು ಆನಂದ– ತೃಪ್ತಿ!

ಅಂದೇ ಸಾಯಂಕಾಲ ನಮ್ಮ ಭಾಗ್ಯವು ಫಲಕ್ಕೆ ಬಂತು. ನಾಲ್ಕು
ಗಂಟೆಗೆ ಹೊರಟ ನಾವು, ರಾಮಾ ಸಿನೇಮ'ದ ಬಳಿಯಲ್ಲಿ, ಮೈದಾನಿನ
ಅಂಚಿನಲ್ಲಿ, ಕರೀನಾಯಿಯನ್ನು ಕಂಡೆವು. ನಿರಾಶರಾದ ನಮಗೆ ದಿನಾಳಿ
ದಂತೆ ಆಸೆಯು ಹೆಚ್ಚುತ್ತ ಬರುತ್ತಿದ್ದ ಕಾರಣವೂ, ಅನುನಿತ್ಯವೂ ಕಪ್ಪು
ನಾಯಿಗಳನ್ನೇ ಪ್ರತೀಕ್ಷಿಸಿದ್ದ ಕಾರಣವೂ, ಕಪ್ಪು ಬಣ್ಣವು ಕಗ್ಗತ್ತಲೆಯೂ
ಕಣ್ಣಿಗೆ ಹೊಳೆದು ಕಾಣುವಷ್ಟು ದೃಷ್ಟಿ ಸಜೀವವಾಗಿತ್ತು. ಅದು ಬೇರೆ ನಾಯಿ
ಯಲ್ಲ. ನಾಯಿಯೆಂಬುದು ಖಂಡಿತವಾಯಿತು. ಒಂದು ಚೂರು 'ಬಿಸ್ಕಿಟು'
ಅದರ ಹತ್ತಿರಕ್ಕೆ ಒಡ್ಡಿದೆವು. ನಾಯಿಮರಿ ಎದ್ದು ನಿಂತಿತು. ಚೂರಿನ

ಕಡೆಗೆ ಕಾಲಿಕ್ಕಿತು; ಮೂಸಿ ತಲೆಯೆತ್ತಿ ನಮ್ಮನ್ನು ನೋಡಿತು. 'ಅರೇ! ಕಾಫಿಪ್ಲಾಂಟರಳ (ಇಂತಹ ಸ್ತ್ರೀವಾಚಕವಿದೆಯೋ ತಿಳಿಯದು) ದವಲತ್ತಿನ ನಾಯಿ! ನಿನ್ನ ಚೂರು ಬಿಸ್ಕಿಟಿನ ನಾತಕ್ಕೆ ಒಲ್ಲದು' ಎಂದನು ಸುಬ್ಬು. 'ಇರಲಿ. ಜಿಪ್'' ಎಂದೆನು ನಾನು. ಅದುವರೆಗೆ ನಾನು ಮೂಗನೆಂದು ಬೆದರಿದ್ದಿತೋ ಏನೋ, ನಾಯಿಮರಿ ಬಾಲ ಅಲ್ಲಾಡಿಸಿ, ಒಂದು ಖದಮ್ (ಎಂದರೆ ಹೆಜ್ಜೆಯೋ? ತಿಳಿಯದು) ನನ್ನ ಕಡೆಗೆ ಬಂತು. 'ಇದು ನಾಯಿಯಲ್ಲ 'ಕಾಮಧೇನು' ಎಂದು ಗೆಳೆಯನೆಂದನು. ನಾನು ನಾಯಿಯನ್ನು ಎತ್ತಿಕೊಂಡು, ದರ್ಜಿಗೆ ಮಜೂರಿ ಕೊಡಲು ಬಾಕಿಯಿದ್ದ ತುಂಡಂಗಿಯೊಳಗೆ ಅದನ್ನು ಅಡಗಿಸಿಟ್ಟೆನು. ಇಬ್ಬರೂ ಮನೆಗೆ ಬಂದೆವು; ಅದನ್ನು ಮೀಯಿಸಿದೆವು; ಬೆಲೆಕೊಡದುದಕ್ಕೆ ನೋಟಿಸು ಬರೆಯಲಿದ್ದ ಸೇಸುವಿನ ಹಾಲನ್ನಿಷ್ಟು ಆ ನಾಯಿಗೆ ಕುಡಿಯಲಿಟ್ಟೆವು. ಅದು ಕುಡಿಯಿತು,— ಪ್ಲಾಂಟರ ನಾಯಿ ಪ್ರಾಶನಮಾಡಿತು. ಇನ್ನು ಆ ನಾಯಿಯನ್ನು ಕುರಿತು ವಿಜ್ಞಾಪನೆಯಿದ್ದ ಪತ್ರಿಕೆಯನ್ನೇ ನಾಯಿಯ ಸುತ್ತಲೂ ಒಂದು ಬಗೆಯಾಗಿ ಸುತ್ತಿ, ಪತ್ರಿಕೆಯ ಹೆಸರನ್ನು ಮೇಲಕ್ಕಿಟ್ಟು, ಆ 'ಪಾರ್ಸೆಲಿ'ನೊಡನೆ ೫॥ ಗಂಟೆಗೆ ಹೊರಡುವ ರೈಲುಬಂಡಿ ಹತ್ತಿದೆವು. ಆಗ ತಾನೆ, ಮನೆಯಿಂದ ಹೊರಡುವಾಗ,— "ಎಲ್ಲಾ ಸಾಮಾನು ಇಲ್ಲದೆ, ನಾಳೆ ಬರುತ್ತೇವೆ— ಕೋಣೆಯ ಜತನ ನಿಮ್ಮ ಮೇಲೆ" ಎಂದು ದನಿಗ ಚೀಟು ಬರೆದಿಡಲು ನಾವು ಬೆದರಲಿಲ್ಲ.

ನಮ್ಮ ಸುಪ್ರಸಿದ್ಧ ವೇಗದ ರೈಲುಗಾಡಿಯು ಸರ್ವರಿಗೂ ಸುಪರಿಚಿತವಾದುದು. ಅದು ಸ್ಟೇಶನಿನಿಂದ ಹೊರಡುವಾಗ, ಇಲ್ಲಿಂದ ಬೇಕಲಿಗೆ ಹೊಗೆಸೊಪ್ಪು ತರಲು ಕಾಲುದಾರಿಯಾಗಿ ಹೊರಟವರು ಬೇಕಲ್ ಸ್ಟೇಶನಿಗೆ ಈ ರೈಲು ತಲಪುವಾಗ, ಹೊಗೆಸೊಪ್ಪನ್ನು ಅಲ್ಲಿಂದ ಹತ್ತಿಸಲು ಸಿದ್ಧರಾಗಿ ನಮಗೆ ಸಂದರ್ಶನಕೊಡುವುದೂ ಉಂಟು. ಸೂರ್ಯನು ಇಂತಹದೊಂದು ರಥ ಹತ್ತಿದರೆ, ಭೂಲೋಕಕ್ಕೆ ಒಂದು ದಿನವಾಗುವುದರೊಳಗೆ ಸಾಮಾನ್ಯ ಮನುಷ್ಯನ ಒಂದು ಜನ್ಮವೇ ಕಳೆದು ಹೋಗುವುದು! ಅದಿರಲಿ, ಸುಬ್ಬು ಬಲು ಆತುರದ ವ್ಯಕ್ತಿ; ನಾವಂತೂ ಟಿಕೇಟಿಗಾಗಿ ಹಣಗಾಡಿ, ಕಿಟಕಿಯಲ್ಲಿ ದುಡ್ಡಿಟ್ಟು, ಟಿಕೇಟನ್ನು ಪಡೆದೆವು ನಿಜ, ಚಿಲ್ಲರೆ ಕಾಸುಗಳು ನಮಗೆ ದೊರೆಯಲು ವಿಳಂಬ ಒಂದು ಕಡೆ, ಪ್ರಯಾಣಿಕರ ನುಗ್ಗಾಟ ಒಂದು ಕಡೆ; ಪದೇ ಪದೇ ರೈಲಿನ ಬಿಗಿಲು ಆದೇಶಕಳ್ಳೋ ನಮ್ಮಲ್ಲಿ ದಿಗಿಲನ್ನುಂಟುಮಾಡಿತು. ನಾವಂತೂ ಏಕಾಂತವಾಗಿ ಜಿಪ್‌ನೊಡನೆ ಇರಬೇಕಾದುದರಿಂದ (ಕಾಣ-ಜಿಪ್‌ನಿಗೆ ಟಿಕೇಟು ತೆಗೆದುಕೊಳ್ಳಲು ಚಿಲ್ಲರೆ ದೊರೆಯಲಿಲ್ಲ. ಜಿಪ್‌ನು

ಪತ್ರಿಕೆಯಾಗಿದ್ದೊಡನೆ ಮನೆಯೊಳಗೆ ಕಟ್ಟಿ ಬೇಕಷ್ಟೆ) ನಾಲ್ಕೇ ಜನ ಪ್ರಯಾಣಿ
ಕರಿಗಾಗಿಟ್ಟ ಆದೊಂದು ಬಂಡಿಯ ಅಂಕದೊಳಕ್ಕೆ ನುಗ್ಗಿದೆವು. ಆದರೆ ಅದ
ರಲ್ಲಿ ಮೊದಲೇ ಒಬ್ಬ ಕೂಲಿಯವನು ಚಕ್ರವರ್ತಿಯಾಗಿ ಕುಳಿತಿದ್ದನು.
ರೈಲು ಬಿಡುವಷ್ಟರಲ್ಲೇ ಹತ್ತೆಂಟು ವಿದ್ಯಾರ್ಥಿಗಳೂ ಗಾಡಿಯೊಳಕ್ಕೆ ನುಗ್ಗಿ
ಬಿಟ್ಟರು. ರೈಲು ಹೊರಟಿತು. 'ಜನಸಂದಣಿ ಪ್ರಬಲವಾಯಿತೆಂ'ದು
'ಚಂಡಕೌಶಿಕ ನಾಟಕ'ದಲ್ಲಿರುವಂತೆ, ನಮ್ಮ ಕೋಣೆಯಲ್ಲೂ ಸಂದಣಿ
ಪ್ರಬಲವಾಯಿತು; ಗಾಡಿಯ ವೇಗದ ಫಲವಾಗಿ ಗಾಳಿಯ ಹಂದಾಟವು
ನಿಧಾನವಾಯಿತು. ಜಿಪ್ಸು ಪ್ಲಾಂಟಿನ ತೊಡೆಯ ಮೇಲೆ ಸುಖವಾಗಿ
ಕುಳಿತವನು. ಅವನು ಮೋಟಾರ್‌ಸವಾರಿಯ ಅಭ್ಯಾಸವುಳ್ಳವನು.
ಅವನು ಸ್ವಲ್ಪ ಗುಣುಗುಟ್ಟಿದನು. ನಾನಾಗಲೇ ಕೈಮುಟ್ಟಿ ಅವನ ಮೋರೆ
ಯನ್ನು ಅಡಗಿಸಿದೆನು. ಕೂಲಿಯಾಳು, 'ಏನಂದಿರಿ!' ಎಂದನು. ನಾನು
ಗಾಡಿಯ ಹೊರಗೆ ಏನೋ ಬಿದ್ದರೆ ಇಣುಕುವಂತೆ ನಟಿಸಿದೆನು. ಆಗ
ಕೂಲಿಯವನು ಸುಮ್ಮಗಾದನು. ವಿದ್ಯಾರ್ಥಿಗಳಿಗಷ್ಟು ಅದು ತಿಳಿಯಲಿಲ್ಲ.
ಇನ್ನೆರಡು ನಿಮಿಷಗಳಲ್ಲಿ ಜಿಪ್ಪನೂ ಪ್ರಬಲನಾದನು. ಪತ್ರಿಕೆಯೊಳಗಿ
ನಿಂದ ಅವನ ಘರ್ಜನೆ ಎದ್ದಿತು. ಕೂಲಿಯವನು ನೋಡಿ—'ಸ್ವಾಮಿ
ಇದು ಕಫದೋಷ! ನನ್ನ ಭಾವನೆಂಟನು ಹೀಗೆಯೇ ಕೆಮ್ಮುತ್ತಿದ್ದನು.
ಜೋಕೆ. ಮುಂದೆ ಇದೇ ಕ್ಷಯರೋಗವಾಗುತ್ತದೆ' ಎಂದನು. ಅವನು
ಕಿವುಡ; ನಾನು ಕೆಮ್ಮುತ್ತಿದ್ದೆನೆಂದೆಣಿಸಿ ಹೀಗೆ ಹೇಳಿದನು; ಚಿಂತೆಯಿಲ್ಲ,
ನನಗೆ ನಗು ಬಂತು. ಮಕ್ಕಳು ನನ್ನ ಭಾವವನ್ನು ನೋಡಿಯೆ, ದಟೋಟು
ತೆರದ ನಾಯಿ, ನನ್ನ ಪತ್ರಿಕೆಯ ಮರೆಯಲ್ಲಿ ದಾಚಹಪಡುವುದಾಗಿ ತಿಳಿದು
ನನ್ನನ್ನು ರೇಗಿಸುತ್ತ, ತಮ್ಮೊಳಗೆ,— ಅದೇಕೋ,— 'ನಿನ್ನೆ ಟಿಕೇಟಿಲ್ಲದ ನಾಯಿ
ತಂದವನಿಗೆ ೫೦ ರೂಪಾಯಿ ಜುಲುಮಾನೆ ಮಾಡಿದ್ದರಲ್ಲ' ಎಂದು ಆಡಿ
ಕೊಳ್ಳಹತ್ತಿದರು. ಅವರಲ್ಲೊಬ್ಬನು 'ಜುಲುಮಾನೆಯಲ್ಲ, ಒಂದು
ವರ್ಷದ ಜೈಲು ವಾಸ' ಎಂದನು. ನಾನು ನಗಲಿಲ್ಲ: ಸುಬ್ಬ 'ಐನೂರು
ರೂಪಾಯಿಗೆ ಎಷ್ಟು ದಿನ ಜೀವಿಸಬಹುದು?' ಎಂದು ನನ್ನೊಡನೆ ಕೇಳಿದನು.
ಆದರೂ ನಾನು ಮಾತಾಡಲಿಲ್ಲ.

ಹೇಗೂ ಜಿಪ್ಪನ 'ಗಡುಗು' ಹೆಚ್ಚುತ್ತ ಬಂತು; ನಾನು ಅಲ್ಲಲ್ಲೆ
ಅದನ್ನು ಒತ್ತಿ, ಬಿಗಿದು, ಬಾಯಿತೆರೆಯದಂತೆ ಮಾಡಿದೆನು. ರೈಲು ಗಾಡಿ
ನಿಧಾನವೇಗವುಳ್ಳದು; ತೀರ ನಿಧಾನವಾಗಿ ನಿಲ್ದಾಣದಲ್ಲಿ ತಡೆಯಿತು.
ಮಕ್ಕಳೆಲ್ಲ ಇಳಿದರು; ಕೂಲಿಯವನೂ ಹೊರಟನು. ಟಿಕೇಟು ಕಲೆಕ್ಟರು

ಕೆಲನಿಮಿಷಗಳಲ್ಲೇ ನನ್ನ ಬಳಿಗೆ ಬಂದು 'ನಾಯಿಗೆ ಟಿಕೇಟು ಎಲ್ಲಿದೆ?' ಎಂದನು. ಅವನಿಗೆ ಇಷ್ಟೆಲ್ಲ ಹೇಗೆ ಪತ್ತೆಯಾಯಿತೊ? 'ನಾಯಿಗೂ ಟಿಕೇಟು ಉಂಟೆಂದು ನನಗೇನು ಗೊತ್ತು?' ಎಂದು ಕ್ಷಮಿಸೆಂದರೆ, ಅದನ್ನು ಪತ್ರಿಕೆಯಲ್ಲಿಟ್ಟು ತರುವಾಗಲೂ ತಿಳಿಯದಿದ್ದಿತೇ?' ಎಂದು ಆ ಟಿಕೇಟುಕಲೆಕ್ಟರನೆಂದನು. ಕಲೆಕ್ಟರರೆಂಬವರೆಲ್ಲರೂ ಇಷ್ಟೆ 'ಜಬರದಸ್ತಿ' ಮನುಷ್ಯರೇನು? ಒಂದು ಚುರುಟು ಕೊಟ್ಟು ನೋಡಿದೆ; ಇಲ್ಲ. ಅವನು ಕೇಳಲೇ ಇಲ್ಲ. ಕೊನೆಗೆ ಅಲ್ಲಿಂದಲೇ ನಾಯಿಯನ್ನು ಹತ್ತಿಸಿದರೆ ಪಳ್ಳಿಕೆರೆಗೆ ತೆರಬೇಕಾದ ಟಿಕೇಟಿನ ಬೆಲೆಯಷ್ಟನ್ನು ತೆತ್ತು, ಇನ್ನು ಜಿಪ್‌ನನ್ನು ಪತ್ರಿಕಾಗೂಡಿನಿಂದ ಮುಕ್ತನನ್ನಾಗಿ ಮಾಡಿದೆನು ನೂರು ರೂಪಾಯಿಯ ಉತ್ಸಾಹವು, ಇಲ್ಲಿ ಕೊಂಚ ತಗ್ಗಿತಾದರೂ, ಜಿಪ್‌ನ ಅಬ್ಬರ ಬಹಳವಾಯಿತು; ಈ ಅಬ್ಬರಕ್ಕೆ ಸೂರ್ಯನೂ ಕಂತಿದನು.

ಪಳ್ಳಿಕೆರೆಗೆ ಬಂದಿಳಿದೆವು. ಅಲ್ಲಿನ ಕಾಫಿ ವಿಲಾಸಕ್ಕೆ ತೆರಳಿದೆವು. ಬಾಗಿಲಲ್ಲೇ ವಿಚಾರಿಸಿಕೊಂಡೆವು—"ತಿಂಡಿಗೇನು? ರಂಜನ್ ಕಾಫಿ ಎರಡು ಕಪ್ ಅಲ್ಲವೇ? ಹಾಲು ಬೇರೆ ಬೇಕೆ....?" ಎಂದು ಅಲ್ಲಿನವನ ವಿಚಾರ. ನಮಗೆ ಅದೊಂದೂ ಅಗತ್ಯವಿರಲಿಲ್ಲ. ನಾವು ಪ್ಲಾಂಟರ ಮಹಿಳೆಯ ಕೋಣೆ ಯಾವುದೆಂದೆವು. ಅದನ್ನು ತೋರಿಸಿದನು; ಒಳಕ್ಕೆ ಕಾಲಿಟ್ಟೆವು.

ಅಲ್ಲಿ ಓರ್ವ ಯುವತಿ ನಮ್ಮನ್ನು ಕಾಣುತ್ತಲೇ ನಗುತ್ತ "ನಾಯಿಯನ್ನು ತಂದಿರೇ? ಅದು ಮಾಯವಾದಂದಿನಿಂದ ಅಮ್ಮನವರಿಗೆ ನಾಯಿಕೆಮ್ಮು ಪ್ರಾರಂಭವಾಗಿದೆ. ಕೂಡ್ರಿ. ಜಿಪ್ಪನು ಅಲ್ಲಿರಲಿ. ನಿಮಗೆ ಒಂದಿಷ್ಟು ಫಲಾಹಾರವಾಗಲಿ!" ಎಂದವಳು ಉಪಚರಿಸಿ, ಸತ್ಕರಿಸಿದಳು. ನಾವು ಬಿಸಿಯಾದೆವು. ಇವಳು ಜಿಪ್ಪನ ದನಿಯಲ್ಲವೆಂದು ನಾವು ತಿಳಿದೆವು. ಆಗವಳು 'ಯಜಮಾನಿಯವರು ಈ ದಿನ ಮಹಿಳಾ ಕ್ಲಬ್ಬಿಗೆ ದಯೆಮಾಡಿಸಿದ್ದಾರೆ. ಬರುವಾಗ ವಿಳಂಬವಾದೀತು' ಎಂದಳು. ನಾವು ತಣ್ಣಗಾದೆವು. "ಆದರೆ, ಅವರ ಮಾತಿನಂತೆ ನಿಮಗೆ ಬಹುಮಾನವನ್ನು ಕೊಡುತ್ತೇನೆ" ಎಂದಳು. ನಾವು 'ಇಂತಹ ಅಲ್ಪ ಕೆಲಸಕ್ಕೆ ಬಹುಮಾನವೇ? ಪರವೂರವರು ನೀವು, ನಿಮ್ಮ ನಾಯಿ ನಮ್ಮೂರಲ್ಲಿ ಕಾಣೆಯಾದುದೆಂಬ ಅಪವಾದವನ್ನು ಹೋಗಲಾಡಿಸಿ, ಊರಿನ ಗೌರವ ಕಾಪಾಡಲು ದೇಶವಾತ್ಸಲ್ಯದಿಂದ ನಾವು ಕೇವಲ ನಮ್ಮ ಕರ್ತವ್ಯ ಮಾಡಿದೆವು' ಎಂದನು ಸುಬ್ಬು. ಹಾಗೆಂದು ನೋಟು ಕೊಡುವಾಗ, ಕೈಯನ್ನು ಹಿಂದಕ್ಕೆ ಸೆಳೆಯಲಿಲ್ಲ. ಯೋಗ್ಯ ರೀತಿಯಲ್ಲಿ ಪರಸ್ಪರವಾಗಿ ವಂದಿಸಿಕೊಂಡ ಬಳಿಕ, ನಾವು ಅಲ್ಲಿಂದ ಹೊರ

ಟೆವು. ನಾಯಿ ಎತ್ತಿ ತಂದವನು ನಾನು; ನೋಟು ಎತ್ತಿಕೊಂಡವನು ಸುಬ್ಬು. ಸುಬ್ಬು ಬಲು ಜಾಗರೂಕ ಮಿತ್ರ!

ರಾತ್ರಿ ೮|| ಗಂಟೆಯ ರೈಲ್ ಗಾಡಿಯಲ್ಲಿ ಹತ್ತಿದೆವು. 'ಸುಬ್ಬೂ, ಈಗ ನಾಯಿಯ ಬಗ್ಗೆ ಟಿಕೇಟೂ ಇಲ್ಲ, ಕಲೆಕ್ಟರರೂ ಇಲ್ಲ. ಆದರೆ ಸುಬ್ಬೂ, –ಸುಖ ಸುಖವೇ ಹೊರತು 'ಸುಖಃ'ವಾಗಿಲ್ಲ ಎಂಬುದು ಈಗ ತಿಳಿಯಿತೇ? ಎಂದೆನು ನಾನು. ಸುಬ್ಬು 'ಆ ದರ್ಜಿ, ■ ಹಾಲುಗಿತ್ತಿ ಸೇಸು, ಕೋಣೆಯ ದನಿ, ಇವರೆಲ್ಲರಿಗೆ ಈಗ ತಾನೇ ತರ್ಪಣ ಕೊಟ್ಟೇನು. ಬಡವರೆಂದು ನಮಗೆ ನೋಟೀಸು ಕೊಡುವರಂತೆ; ಇನ್ನವರು ಕಾಯುವ ಅಗತ್ಯವಿಲ್ಲ. ಈಗ ಕೋಣೆಯಲ್ಲಿ ಕಾಲಿಡುವ ಮೊದಲೇ ನೋಟು ಮಟಾಯಿಸಿ, ಜಿಪ್ಪನ ಪುನರ್ಜನ್ಮದ ಉತ್ಸವವನ್ನು ಓತಣ ಸಮಾರಂಭದಿಂದ ಜರಗಿಸೋಣ!' ಎಂದನು.

ಊರಿಗೆ ಬಂದೊಡನೆ ನಮಗೆ ಹೊಟೆಲಿನಲ್ಲಿ ಔತಣವಾಯಿತು. ಮೂರು ವರ್ಷದ ಭಾಷಾಸೇವೆಯಿಂದ ದೊರೆಯದ ಔತಣವು ಬರೀ ನಾಯಿ ಸೇವೆಯಿಂದ ಇಂದು ದೊರೆಯಿತೆಂದೂ ಸುಬ್ಬು ತಿಳಿಯಲಿಲ್ಲ.

ಮರುದಿನ ನಾವು ಲೇಖನ ವ್ಯವಸಾಯದ ಗೊಡವೆ ಬಿಟ್ಟೆವು. ಮನುಷ್ಯನಿಗೆ, ಮಹಾತ್ಮರಾದವರಿಗಾದರೂ. ಇರುವುದು ಅನ್ನವಸ್ತ್ರದ ಚಿಂತೆ. ಅಷ್ಟನ್ನೇ ನಿವಾರಿಸಿಕೊಳ್ಳುವುದರಲ್ಲಿ ಆಸಕ್ತರಾದೆವು. ಮೂವತ್ತು ರೂಪಾಯಿಗಳನ್ನು ತಗಾದೆಯವರಿಗೆ ತೆತ್ತು, ಅವರು ಅನಾವಶ್ಯಕವಾಗಿ, ನಮ್ಮ ಟಪ್ಪಾಲು ಪೇದೆಗೆ ಹೊರಲು ಕೊಡುವ ಪತ್ರ ವ್ಯವಹಾರದ ಹೇರನ್ನು ನಿವಾರಿಸಿ, ಲೋಕೋಪಕಾರ ಮಾಡಿದೆವು. ಸತ್ಯನಾರಾಯಣವ್ರತ, ಮಿತ್ರಭೋಜನ, 'ಕನ್ಸೆಶನ್ ಟಿಕೇಟ್''ನಲ್ಲಿ ಬೆಂಗಳೂರು ಯಾತ್ರೆ, ತಿರುಪತಿ ದರ್ಶನ, ಪ್ಲಾಂಟರುಗಳ ಜೊತೆಯವಳಿಗೆಂದು ಉಡುಗರೆ, 'ಡರ್ಬಿ ಜೂಜಿನ' ಹಲವು ಟಿಕೇಟು, ಇತ್ಯಾದಿಗಳಿಗೆ ನಮ್ಮ ಹಣವನ್ನು ವಿನಿಯೋಗಿಸಬೇಕಾಗಿಯೂ ಹಲವು ಶಿಫಾರಸುಗಳನ್ನು ಮಾಡಿದೆವು. ಆದರೂ ಹಣದ ಗಂಟನ್ನು ಬಿಚ್ಚಲು ಸುಬ್ಬು ಒಲ್ಲನು. ನಾನು ಒಪ್ಪಲಿಲ್ಲ. ಹೀಗಾಗಿ ಅಂದು ನಮ್ಮ ಶಿಫಾರಸುಗಳನ್ನೆಲ್ಲ ಗಂಟುಕಟ್ಟಿ ಹಣದೊಡನೆ ತಲೆದಿಂಬಿಗಿಟ್ಟುಕೊಂಡು ನಿದ್ದೆ ಹೋದೆವು.

ಬೆಳಿಗ್ಗೆ ಏಳುವಾಗಲೇ ಒಂದು ಲಕೋಟೆ ಬಂತು. 'ದೊಡ್ಡ ಸೈಜು' ಎಂದು, 'ಡ್ರೈಂಗ' ಹೇಳುತ್ತಾರಲ್ಲ, ಹಾಗೆ. ನಾವು ಶ್ರೀಮಂತರಾದೆವೆಂದು ಟಪ್ಪಾಲಿನವನಿಗೂ ಗೊತ್ತಾಯಿತು! 'ಏನೋ ಕೆಟಲಾಗು', ಅಥವಾ ಇನ್ಶ್ಯೂ

ರೆಸ್ಸ್ ಕಂಪೆನಿಯ ಪತ್ರಿಕೆ'ವಾಗಿರಬಹುದೆಂದು ನಮ್ಮ ಭಾವನೆ. ಒಡೆದಾಯಿತು. ಅಲ್ಲ, ಅದೊಂದು ಪತ್ರ; ಸುಬ್ಬು ಓದಿದನು. 'ಜಿಪ್ಪನಂತಹ ಸಾಯಿಗಳು ಕಡಿಮೆ' (ಇಲ್ಲದಿದ್ದರೆ ನೂರು ರೂಪಾಯಿ ಕೊಡುವರೇ?)— ಅದನ್ನು ಕಾಣದೆ ಕಂಗಲಾಗಿದ್ದೆ. ನೀವು ತಂದುದು ಉಪಕಾರ'–(ಇನ್ನೇಕೆ? ಸಂದಾಯವಾಗಿದೆಯಲ್ಲ, ಅಥವಾ ಇನ್ನೂ ಇದೆಯೇ?) 'ಆದರೆ, ಅದು ಜಿಪ್ಪನಂತೆಯೇ ಇದೆ ಹೊರತು, ಜಿಪ್ಪನಲ್ಲ. ಇದು ಮೋರೆ ನೆಕ್ಕುವುದಿಲ್ಲ—ಅದಕ್ಕಾಗಿ ಇದನ್ನು ನಿಮ್ಮಲ್ಲಿಗಿಂದು ಸಾಯಂಕಾಲ ೪ ಗಂಟೆಗೆ ಮುಟ್ಟಿಸುತ್ತೇನೆ. ಇಂತು...." ಎಂದು ಬರಹ. ಸುಬ್ಬು ಮೋರೆ ಕಹಿ ಮಾಡಿಕೊಂಡನು. ನಾನು ಸಪ್ಪಗಾದೆ.

ಈಗ ಎಲ್ಲಾ ಹಣವನ್ನು ಹಿಂದಕ್ಕೆ ಕೊಡಬೇಕಾಗಿ ಬಂತು! ಎಂದು ಸುಬ್ಬು ಎನ್ನುವಾಗ, ಅವನ ಮೋರೆ, ಕಣ್ಣು, ಧ್ವನಿಯನ್ನು ಕಂಡು ಕೇಳಿ, ನಾನು ಬತ್ತಿದೆನು. ಹಣ್ಣಾದೆನೋ, ಕರಗಿದೆನೋ ತಿಳಿಯದು. ಮೂವತ್ತು ರೂಪಾಯಿಗಳನ್ನು ಈ ಮೊಬಲಗಿಗೆ ಕೂಡಿಸಿಕೊಡುವುದೆಲ್ಲಿಂದ? ಹೊರಡುವುದಾದರೋ, ಅವಳ ಹಣವನ್ನೇ ಧ್ವಂಸ ಮಾಡುವುದೆಂದರೆ, ಎಷ್ಟು ವ್ಯಥೆ! ಸಾಲಕ್ಕೆಲ್ಲಿಗೆ ಹೋಗಲಿ? ಉತ್ತರ ದೊರೆಯದು. 'ಪ್ರತಿಭಾಶಾಲಿ'ಗಳಾದ ಇಬ್ಬರು ಗ್ರಂಥಕರ್ತರ ದಾರಿದ್ರ್ಯವನ್ನು ನಿವಾರಿಸಬಲ್ಲ ಶ್ರೀಮಂತರು, ಈ ಭೂಲೋಕದಲ್ಲಿ ಸುಲಭವಾಗಿ ಸಿಗರು. ಹಾಗೆಂದು, ಮೂವತ್ತು ರೂಪಾಯಿ ಸಾಲವನ್ನು ಅವಳಿಂದಲೇ ಬೇಡಿ, ೬ಂಗಳಿಗೆ ಒಂದಾಣೆಯಂತೆ ಪಾವತಿಮಾಡ ಬರುವುದೇ? ಅಡವು ಇಟ್ಟ ಸಾಲವೆಂದರೆ, ನಮ್ಮನ್ನೆ 'ಅಡವಿಟ್ಟು'ಕೊಂಡರೂ ಹತ್ತು ರೂಪಾಯಿ ಕೊಡುವವರಿಲ್ಲ. ಸಹಕಾರೀ ಸಂಘದಿಂದೆತ್ತುವುದೇ? ನಮಗೆ ಜಾಮೀನು ಸಿಗದು. ಇನ್ನು ದೇವರ ಧ್ಯಾನವೇ ಲಾಭ! ಅಂತು ನಿನ್ನೆಯ ಔತಣದಿಂದ, ಇಂದು ಉಪವಾಸವಿರಬೇಕಾಯಿತು.

ಆ ದುರ್ದಿನದ ನೆನಪು ಕೂಡ ಭಯಂಕರ! ಮಧ್ಯಾಹ್ನ ನಾಲ್ಕು ಗಂಟೆಯ ಸುಮಾರಿಗೆ ಮುನ್ಸಿಪಲ್ ಗಾಡಿಗಳು ಅತ್ತಿತ್ತ ಓಡುವುದನ್ನು ನೋಡಿದರೆ, ನಮ್ಮ ಮೈಯೆಲ್ಲ ಜುಮ್ಮೆನಿಸುತ್ತಿತ್ತು. ಪ್ಲಾಂಟರಳನ್ನು ಮಹಿಳಾ ಕ್ಲಬ್ಬಿಗೆ ಇಂದು ಇದೇ ಹೊತ್ತಿಗೆ ಯಾರಾರೂ ಕರೆಯಬಾರದೇಕೆ? ಅಥವಾ ಮುನ್ಸಿಪಲ್ ಶಾಲೆಗೆ ಬಹುಮಾನ ಹಂಚಲು ಅವಳನ್ನು ಈಗಲೇ ಯಾರಾರೂ ಕರೆಯಬಾರದೇಕೆ? ಕಾಫೀ ತೋಟದ 'ಎಕ್ಸ್‌ಪ್ರೆಸ್' ತಂತಿ ವಾರ್ತೆ ಬಂದು ಇವಳು ಮರಳಿದರೇನು ಸುಖವಾಗದೇ? ಅಥವಾ ಅವಳ ಮೋಟಾರು ಹೇಗೂ ಮೌನವಾಗಿ ಜಡವಾಗಿ ಬಿದ್ದರೆ, ಅದೂ ಉತ್ತಮವೇ

ಎಂಬಿತ್ಯಾದಿಯಾಗಿ ವಾಂಛೆಗಳು ನಮ್ಮಲ್ಲಿ ಮೊಳೆತುವು. ಆದರೆ, ಗ್ರಂಥಕರ್ತರು ಎನ್ನುವಂತೆ,—'ಕಾಲಚಕ್ರವನ್ನು ತಡೆಯಲಾಗುವುದುಂಟೇ?' ಈ ಚಕ್ರವು ಉರುಳಿಉರುಳಿ, ಅವಳ ಮೋಟರನ್ನೇ ನಮ್ಮಲ್ಲಿಗೆ ನಡೆಯಿಸಿ ತಂದಿತು. ಅಯ್ಯೋ, ಅವಳು ಗೌರವದ ಭಾರದಿಂದ ಹೆಜ್ಜೆ ಇಟ್ಟು ಮಹಡಿಗೆ ಏರುತ್ತ ಬರುವಾಗ, ಅವಳ ಒಂದೊಂದು ಹೆಜ್ಜೆಯೂ ನಮ್ಮ ಎದೆಯ ಮೇಲೆ ಒದ್ದಂತಾಗುತ್ತಿತ್ತು. ಕೂಡಲೇ ನಾವು ಉಡುಪನ್ನು ತಿದ್ದಿಕೊಂಡು, ಮೇಜುಗಳ ಬಳಿಗೆ ಧಾವಿಸಿ, ಏನೋ ಗಂಭೀರ ಭಾವನಾಸಾಗರದಲ್ಲಿ ಓಲಾಡುತ್ತಿದ್ದಂತೆ ನಟಿಸಿದೆವು. ಹದಿನಾಲ್ಕು ಲೋಕಗಳ ಹೊರಗಣಿಂದ ಯಾವುವೋ ವಿಶೇಷ ಅಪೂರ್ವವಾದ ಕಲ್ಪನೆಗಳು ನಮ್ಮ ಮೆದುಳೊಳಗೆ 'ವಾಯರ್ಲೆಸ್' ಮೂಲಕ ಪ್ರವೇಶಿಸಿ ಪ್ರಸನ್ನವಾಗುವ ಮುಹೂರ್ತವು ಆಗಲೇ ಒದಗಿದಂತೆ ನಾವು ತೋರಿಸಿಕೊಂಡೆವು ಆ 'ಪ್ಲಾಂಟ'ರಳೂ ಚಂದ್ರಾವತಿಯೂ ಒಳಗೆ ಬಂದರು. ನಾವು ಮಾತ್ರ ವಂದಿಸಿ ನಿಂತೆವು.

ಪ್ಲಾಂಟರಳ ಕಾಫಿತೋಟವು ಬಲು ವಿಸ್ತಾರವಾಗಿರಬೇಕು; ಅವಳಷ್ಟು ಉದ್ದ, ಅಗಲ. ಹಣದ ಹೊರೆಯನ್ನು ದೇವರು ಅವಳಿಗೆ ಕರುಣಿಸಿದಾಗ, ಅವಳಿಗೊಂದು ದೇಹದ ಹೊರೆಯನ್ನೂ ವರವಾಗಿ ಕರುಣಿಸಿದ್ದನು! ಎಲ್ಲಕ್ಕೂ ಮೊದಲಾಗಿ, ಆ ಮೂಗು—ಆ ಹಣೆ! ಮಾಳಿಗೆಗೆ ಏರಿಬಂದ ಶ್ರಮಪರಿಹಾರಕ್ಕೆ ಕಾಲುತಾಸು ಬೇಕಾಯಿತು. ಅಷ್ಟು ಹೊತ್ತು ಸುಬ್ಬು ಕಿಟಕಿಯ ಹೊರಕ್ಕೆ ನೋಡಿದನು; ನಾನು ಏನನ್ನು ನೋಡುತ್ತಿದ್ದೆನೋ ತಿಳಿಯಲಿಲ್ಲ. ನನ್ನ ಕಾಲ ಬಳಿಯಲ್ಲಿ ಏನೋ ಸುಳಿಯುತ್ತಿದ್ದಂತೆ ತಿಳಿದೆನು;—ಅದೇ ನಾವು ಕಂಡುಕೊಂಡಿದ್ದ ಜಿಪ್!

ಅದು ಹೇಗಾಯಿತೋ, ಸುಬ್ಬನ ಕಣ್ಣು ನನ್ನ ಕಡೆಗೆ ತಿರುಗುವಾಗಲೇ, ನನ್ನ ಕಣ್ಣೂ ಅವನ ಕಣ್ಣುಗಳ ಕಡೆಗೇ ತಿರುಗಿತು. 'ಆರಂಭಿಸು' ಎಂದು ಅವನ ಸೂಚನೆ; 'ನೀನೆ' ಎಂದು ನನ್ನ ಸನ್ನೆ! ಹೇಗೂ, ಕೋಣೆಯಲ್ಲಿ ಕೊಂಚ ಶಾಂತ ವಾತಾವರಣ ಬೀರಿದಂತಾಯಿತು.

ನಾನು ಬಾಯ್ತೆರೆಯುವುದೆಂದಾಯಿತು. ಸ್ವರ ಸಡಲಿಸಿಕೊಂಡೆನು. ಧ್ವನಿ ಹೊರಡುವ ಮೊದಲೇ, ಗಂಟಲಲ್ಲಿ ಏನೋ ಸಿಲ್ಕಿಕೊಂಡಿದ್ದಂತೆ ತೋರಿದ್ದನ್ನು ನುಂಗಿಕೊಂಡೆನು. ಅಷ್ಟರಲ್ಲಿ, ನನ್ನ ಮೆದುಳಲ್ಲಿ ಒಂದು ಭಾವನೆ ಅಂಕುರಿಸಿತು. ಇದಕ್ಕೆ ಗ್ರಂಥಕರ್ತರು 'ಸ್ಫುರಣ' ಎನ್ನುತ್ತಾರೆಯೋ?

'ಅಕ್ಕಾ! ಒಂದು ಮಾತಿದೆ' ಎಂದು ನಾನೆಂದನು. 'ಅದೂ ಜಂತಕಂಗ'ವೆಂದು ಪುನಃ ನುಡಿದೆನು.

'ನನ್ನೊಡನೆ ಅಂತರಂಗವೇ? ಇಷ್ಟು ಮುಂದಿಯು ಮುಂದೆ?' ಎಂದಳವಳು. (ಅವಳು ಮಾತನಾಡುವಾಗ ಬಾಯಿಯಲ್ಲಿ ಕಾಫಿಬೀಜಗಳಂತಹ ಇತಿ ಹಲ್ಲುಗಳು ತೋರುತಿದ್ದವು)

'ನಮ್ಮ ಗೆಳೆಯ ಗಟ್ಟಿಗ. ಸ್ವಲ್ಪ ವಿನಯಾವನತ. ಮಾತು ಹೊರಡದು. ಅರಿಕೆಮಾಡಬೇಕೆಂದಿದ್ದಾನೆ. ನಾನೇ ಹೇಳಿಕೊಳ್ಳಲೇ?' ಎಂದೆನು.

ಸುಬ್ಬು ನನ್ನ ಹೇಳಿಕೆ ಏನೆಂದು ತಿಳಿಯಲಾರ; ಅವನ ಎದೆ ಹಾರಿದ ಭರಕ್ಕೆ, ಅವನ ಕಣ್ಣುಗಳು ಎರಡೂ ಎದ್ದು ಹೊರಡುವಂತಾಗಿದ್ದಿತು. ಅವನು ನಗಲೆತ್ನಿಸಿ, ಅಳುವಂತೆ ಕಾಣಿಸಿಕೊಂಡನು!

'ನೀವಿಲ್ಲಿಗೆ ಬಂದುದೇ, ತನ್ನ ಜೀವನದಲ್ಲಿಂದೂ ಬರೆಯದಂತಹ ಉತ್ತಮ ಗ್ರಂಥವೊಂದನ್ನು ಈಗ ಬರೆಯುವುದೆಂದು ಅವನ ನಿಶ್ಚಯವಾಗಿದೆ. 'ಭಾರತೀಯ ವಿದೂಷಿಯರ ಇತಿಹಾಸ' ಬರೆದ ಗ್ರಂಥಕರ್ತನಿವನು. ಈಗ ತಮ್ಮ ಜೀವನಚರಿತ್ರೆಯನ್ನೆ ಬರೆದು, ತನ್ನ ಜೀವನವನ್ನು ಪವಿತ್ರಗೊಳಿಸುವನಂತೆ. ಅದಲ್ಲದೆ ಅನಂತರ ಅವನು ಮತ್ತೇನನ್ನೂ ಬರೆವುದಿಲ್ಲವಂತೆ! ತಮ್ಮ ಅನುಮತಿ ಬೇಡಬೇಕೆಂದಿರುವನು' ಎಂದು ನಾನು ವಕೀಲನಾಗಿ ವ್ಯವಹರಿಸಿದೆನು. 'ನಾನು ತಮ್ಮದೊಂದು ಭಾವಚಿತ್ರವನ್ನು ಸ್ವತಃ ಅಂಕಿಸುವೆನು' ಎಂದು ನುಡಿದು ಅವಳಿಗೆ ಕೂರಿಸಿದೆನು.

ಪ್ಲಾಂಟರಳ ಕಾಫಿತೋಟದ ಫಸಲು ಆಗಲೇ ಚನ್ನಾಯಿತು; ಖಂಡಿಗೆ ನಾನೂರು ರೂಪಾಯಿ ಮೌಲ್ಯವೂ ಬಂತು. ಇವಳು ಹಿಗ್ಗಿದಳು. ವಾಸ್ತವವಾಗಿಯೂ ಅವಳ ಆಸನವು ಅವಳನ್ನು ಹೊತ್ತಿದ್ದೇ ಆಗ ಕಷ್ಟ. ಸುಬ್ಬು ಏನೇನ್ನೋ ಹೇಳತೊಡಗುತಿದ್ದನು; ನನ್ನ ಕೆಂಗಣ್ಣೆದುರು ಅವನು ಉಸುರೆತ್ತಲಾರದಾದನು.

ಮಹಾಶಯೆ ಅದನ್ನೊಪ್ಪಿಕೊಂಡು, ಬೇಕಾದ ಅಪ್ಪಣೆ ಅನುಗ್ರಹಿಸಿದಳು.

ನಾನು,—'ತಮ್ಮ ಆ ನೂರಾರು ರೂಪಾಯಿಗಳ ವಿಷಯವಾಗಿ....' ಎನ್ನುವಷ್ಟರಲ್ಲಿ, ಒಂದು ಕಡೆ ಸುಬ್ಬು ಚಡಪಡಿಸಿದ ಕಾರಣ, ಪ್ಲಾಂಟರಳು—'ಆ ವಿಷಯ ಈಗೇನೂ ಬೇಡ. ನನ್ನ ವಿಷಯವಾಗಿ ಬರೆದ ಗ್ರಂಥಕ್ಕಾಗಿ ಅದೆಲ್ಲ ಮುಂಗಡವೆಂದಾಗಲಿ' ಎಂದಳು. ಭಟ್ಕಳದ ರಾಣಿಯೂ ಹೀಗೆ ಜೀವನಚರಿತ್ರೆ ಬರೆಯಿಸಿ ನಾಲ್ಕು ಮಾಗಣೆಗಳನ್ನೆ ದತ್ತಿಯಾಗಿ ಆ ಗ್ರಂಥಕರ್ತ ಪುಣ್ಯಾತ್ಮನಿಗೆ ಕೊಟ್ಟಿದ್ದಳಂತೆ!

(ಹೊದಿಕೆಯ 2ನೇ ಪುಟಕ್ಕೆ ಮುಂದುವರಿದಿದೆ)

**Edited, Printed & Published by K. V. Shenoy at The Prabhat Printers, Ltd., Mangalore.**